# ವಿಜಯನಗರದ ಪ್ರಾಂತೀಯ ಧೋರಣೆಗೆ ಸ್ಥಳೀಯ ಪ್ರತಿಕ್ರಿಯೆ

**ಡಾ|| ಬಿ. ವಸಂತಶೆಟ್ಟಿ**

ವಿಜಯನಗರ ಸಾಮ್ರಾಜ್ಯದ ಪ್ರಾಂತೀಯ ಧೋರಣೆಗೆ ಸ್ಥಳೀಯ ಪ್ರತಿಕ್ರಿಯೆ ಹೇಗಿತ್ತೆಂಬುದನ್ನು ಬಾರಕೂರು ಮತ್ತು ಮಂಗಳೂರು ಪ್ರಾಂತ (ರಾಜ್ಯ) ಗಳಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡುವುದು ಈ ಪ್ರಬಂಧದ ಉದ್ದೇಶ.

ಉತ್ತಮ ಆಡಳಿತ ನೀಡುವ ಉದ್ದೇಶದಿಂದ ವಿಜಯನಗರದ ಅರಸರು ಸಾಮ್ರಾಜ್ಯವನ್ನು ವಿವಿಧ 'ರಾಜ್ಯ'ಗಳಾಗಿ ವಿಭಾಗಿಸಿದ್ದರು. ಈಗಿನ ದಕ್ಷಿಣ ಕನ್ನಡ ಜಿಲ್ಲೆ ವಿಜಯನಗರ ಸಾಮ್ರಾಜ್ಯದ ಎರಡು .ರಾಜ್ಯ' ಗಳಾದ **ಬಾರಕೂರು** ಮತ್ತು **ಮಂಗಳೂರು** ರಾಜ್ಯಗಳನ್ನು ಒಳಗೊಂಡಿತ್ತು. ವಿಖಯನಗರದ ಸಾಮ್ರಾಟರು ಈ ಎರಡು ಆಡಳಿತ ವಿಭಾಗಗಳಿಗೆ ಕಾಲಕಾಲಕ್ಕೆ ರಾಜ್ಯಪಾಲರುಗಳನ್ನು ನೇಮಿಸುತ್ತಿದ್ದರು. ಆಗಾಗ ರಾಜ್ಯಪಾಲರುಗಳ ವರ್ಗಾವಣೆ ನಡೆಯುತ್ತಿದ್ದುದರಿಂದ ಈ ಪ್ರದೇಶದಲ್ಲಿ ಆಡಳಿತ ನಡೆಸಿದ ರಾಜ್ಯಪಾಲರುಗಳ ದೊಡ್ಡ ಪಟ್ಟಿಯೇ ನಮಗೆ ದೊರೆಯುತ್ತದೆ. ಇವರು ತಮ್ಮ ಆಡಳಿತದ ಸಮಯದಲ್ಲಿ ಕೇಂದ್ರ ಸರಕಾರದ ಹಿತವನ್ನು ನಿರ್ಲಕ್ಷಿಸುವಂತಿರಲಿಲ್ಲ. ಅಂತೆಯೇ ಸ್ಥಳೀಯಾಡಳಿತ ಸಂಸ್ಥೆಗಳ ವಿಶೇಷಾಧಿಕಾರವನ್ನೂ ಉಲ್ಲಂಘಿಸುವಂತಿರಲಿಲ್ಲ. ಪ್ರಾಂತ ಅಥವಾ ಕೇಂದ್ರ ಸರಕಾರಕ್ಕೆ ಬರಬೇಕಾದ ತೆರಿಗೆ ಸಂಗ್ರಹಿಸುವ ಕಾರ್ಯಕ್ಕೆ ಚ್ಯುತಿ ಬಾರದಂತೆ ಹಾಗೂ ಕೇಂದ್ರದ ಧೋರಣೆಗಳನ್ನು ಜಾರಿಗೆ ತರುವಲ್ಲಿ ಸ್ಥಳೀಯ ಸಂಸ್ಥೆಗಳು ಅಥವಾ ಪ್ರಜೆಗಳ ಹಿತಕ್ಕೂ ಧಕ್ಕೆ ಬಾರದಂತೆ ಬಹಳ ಜಾಗರೂಕತೆಯಿಂದ ವರ್ತಿಸಬೇಕಾಗಿತ್ತು. ರಾಜ್ಯಪಾಲರುಗಳ ದಬ್ಬಾಳಿಕೆಗೆ ಪ್ರಜೆಗಳು ಒಳಗಾದಾಗ ಸಾಮ್ರಾಟರು ಮಧ್ಯ ಪ್ರವೇಶಿಸಿ ನ್ಯಾಯದಾನ ಮಾಡಿದ ಅನೇಕ ಘಟನೆಗಳು ಪಶ್ಚಿಮ ಕರಾವಳಿಯ ಬಾರಕೂರು ಮತ್ತು ಮಂಗಳೂರು ರಾಜ್ಯಗಳಲ್ಲಿ ದೊರೆಯುತ್ತವೆ.[1]

ಸ್ಥಳೀಯ ಸಂಸ್ಥೆಗಳಿಂದ ಅಧಿಕಾರವನ್ನು ಕೇಂದ್ರಕೆ ವರ್ಗಾಯಿಸುವ ಕ್ರಮವನ್ನು ವಿಜಯನಗರದ ಅರಸರು ಕೈಗೊಳ್ಳಲಿಲ್ಲ.[2] ಪ್ರಜೆಗಳ ಮೇಲೆ ರಾಜ್ಯಪಾಲರುಗಳ ದಬ್ಬಾಳಿಕೆಯನ್ನು ಅವರು ಸಹಿಸುತ್ತಿರಲಿಲ್ಲ, ಅಂತಹ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳುತ್ತಿದ್ದರು.

ಕ್ರಿ. ಶ. 1404 ರಲ್ಲಿ ಮಹಾಬಲದೇವ ಒಡೆಯ ರಾಜ್ಯವನ್ನಾಳುತ್ತಿದ್ದಾಗ ಅಲ್ಲಿ 'ನಖರ-'ಹಂಜಮಾನ' ವ್ಯಾಪಾರಿ ಸಂಘಗಳ ಸೆಟ್ಟಿತನದ ಅನ್ಯಮಾನ್ಯ ಸಮಯ ಸಂಕೇತಗಳನ್ನು ರದ್ದುಗೊಳಿಸಿದ್ದನ್ನು ಪ್ರತಿಭಟಿಸಿದ ಹತ್ತು ಕೇರಿಯ ಹಲರು, ಸ್ಥಾನಪತಿ (ಪುರಸಭೆಯ ಅಧ್ಯಕ್ಷ) ಚಿಕ್ಕಣ್ಣನ ಮೂಲಕ ಸಾಮ್ರಾಟ ಇಮ್ಮಡಿ

1. Mahalingam T. V. Administration agnd Social Life under Vijayanagar, IInd Edn, Part I (Madras 1969) P. 197.
2. Salefore B. A, Social and Political Life in the Vijayanagar Empire vol I (Madras 1934) p. 342.

ಬುಕ್ಕನಿಗೆ ದೂರಿತ್ತರು. ಸಾಮ್ರಾಟನ ಆಜ್ಞೆಯಂತೆ ಗೋವೆಯ ಬಾಚಣ್ಣ ಒಡೆಯ ತನಿಖೆ ನಡೆಸಿ ಮಹಾಬಲ ದೇವ ತಪ್ಪಿತಸ್ಥನೆಂದು ತೀರ್ಮಾನವಾದಾಗ ತೊಂದರೆ ಗೊಳಗಾದವರಿಗೆ ಪರಿಹಾರ ನೀಡಲಾಯಿತು.[3] ವಿಶೇಷ ಸ್ಥಾನಮಾನಗಳಿಗೆ ಚ್ಯುತಿ ಬಂದಾಗ ಜನರು ಅಸಹಾಯಕ ರಾಗಿರುವ ಅಗತ್ಯವಿರಲಿಲ್ಲ.

ಕ್ರಿ.ಶ. 1418ರಲ್ಲಿ ಮಂಗಳೂರಿನಲ್ಲಿ ರಾಜ್ಯಪಾಲ ನಾಗಿದ್ದ ತಿಮ್ಮಣ್ಣ ಒಡೆಯ ಸೈನ್ಯವನ್ನು ಹಂಜಮಾನ (ಮುಸ್ಲಿಂ ವ್ಯಾಪಾರಿ ಸಂಘ) ರ ಮೇಲೆ ಹರಿಯಬಿಟ್ಟು ಅವರ ಪಳ್ಳಿಗಳನ್ನು ಸುಟ್ಟುಹಾಕಿದ.[4] ಪೂರ್ವಮರ್ಯಾದೆ ಗನುಗುಣವಾಗಿ ಹಂಜಮಾನದವರು[5] ನಡೆದುಕೊಂಡಿ ದ್ದರೂ ರಾಜ್ಯಪಾಲನ ದಬ್ಬಾಳಿಕೆಯ ವರ್ತನೆಯಿಂದ ಅಲ್ಲಿನ ಮುಸ್ಲಿಮರು ಪ್ರತಿಭಟನಾರ್ಥ ಊರು ಬಿಟ್ಟು ಹೋದ ವಿಚಾರ ಸಮ್ರಾಟನಿಗೆ ತಿಳಿದು, ಅವನು ಬೈಚ ದಂಡನಾಯಕನಿಗೆ ವಿಷಯ ಪರಿಶೀಲಿಸುವಂತೆ ತಿಳಿಸಿದ. ರಾಜ್ಯಪಾಲರು ತಪ್ಪಿತಸ್ಥನೆಂದು ಖಚಿತವಾದಾಗ, ಅವನೇ ಆ ತಪ್ಪನ್ನು ಸರಿಪಡಿಸಿ ಪರಿಹಾರ ನೀಡುವಂತೆ ಸೂಚಿಸ ಲಾಯಿತು. ತಿಮ್ಮಣ್ಣ, ಒಡೆಯನು ಮಂಗಳೂರು ರಾಜ್ಯದ 'ಕಟ್ಟಳೆಯವ'ರಾದ ಬಂಗ, ಚೌಟ, ಅಜಿಲ ಮುಂತಾದವರೊಡನೆ ಚರ್ಚಿಸಿ ಮಂಗಳೂರಿನಲ್ಲಿ ಜಮಾ ತುಪಳಿಗೆ 'ಧರ್ಮಪರಿಹಾರ' ನೀಡಿದ. ಹೀಗೆ ತಿಮ್ಮಣ್ಣ ಒಡೆಯನು ಜಮಾತಿನವರ ಪ್ರತಿಭಟನೆಗೆ ಮತ್ತು ಕೇಂದ್ರ ಸರಕಾಳದ ಒತ್ತಡಕ್ಕೆ ಮಣಿಯಬೇಕಾಯಿತು.

ಅಣ್ಣಪ್ಪ ಒಡೆಯ ಬಾರಕೂರು ರಾಜ್ಯದ ರಾಜ್ಯ ಪಾಲನಾಗಿದ್ದಾಗ ಕ್ರಿ.ಶ. 1436ರಲ್ಲಿ ಶಿವಳ್ಳಿ (ಉಡುಪಿ) ಯಲ್ಲಿ ಸಮಸ್ಯೆಯೊಂದನ್ನು ಇದಿರಿಸಬೇಕಾಯಿತು. ಅವನು ಶಿವಳ್ಳಿಯ ಮೇಲೆ ಧಾಳಿಮಾಡಿ ಆ ಊರನ್ನೇ ಹಾಳುಗೆಡಹಿದ.[6] 'ಕಟ್ಟಳೆಯವರು' ಮತ್ತು ಬಾರಕೂರಿನ ಹತ್ತುಕೇರಿಯವರು ಸೇರಿ ಅಲ್ಲಿನ ಗ್ರಾಮಸ್ಥರನ್ನು ಸಾಂತ್ವನಗೊಳಿಸಿದರು. ಅಣ್ಣಪ್ಪಒಡೆಯನ ಈ ಕ್ರಮ ದಿಂದ ಉಡುಪಿಯ ಶ್ರೀಕೃಷ್ಣ ದೇವಾಲಯವೂ ತೊಂದರೆ ಗೊಳಗಾಗಿತ್ತು. ಬಾರಕೂರಿನ ಪುರಸಭೆ ಮತ್ತು ಪ್ರಾಂತೀಯ ಸಮಿತಿಯವರ (Provincial Council) ಮಧ್ಯ ಪ್ರವೇಶದಿಂದ ತೊಂದರೆಗೊಳಗಾದವರಿಗೆ ಪರಿಹಾರ ದೊರೆಯಿತು.

ರಾಜ್ಯಪಾಲರು ದಬ್ಬಾಳಿಕೆ ನಡೆಸಿದ ಇನ್ನೊಂದು ಉದಾಹರಣೆ ಬಾರಕೂರು ರಾಜ್ಯದ ರಾಜ್ಯಪಾಲನಾಗಿದ್ದ ತಿಮ್ಮಣ್ಣ ಒಡೆಯನದು. ಉಡುಪಿ ತಾಲೂಕಿನ ಚಾಂತಾರು ಮತ್ತು ಹಾರಾಡಿ ಗ್ರಾಮಗಳಲ್ಲಿ ದೊರೆತ ಎರಡು ಹೊಸ ಶಾಸನಗಳು ಅಲ್ಲಿ ನಡೆದ ಎರಡು ಘಟನೆ ಗಳನ್ನು ಉಲ್ಲೇಖಿಸುತ್ತವೆ. ಚಾರದ ತಿಮ್ಮಣ್ಣ ಒಡೆಯ ಕ್ರಿ.ಶ. 1442 ಮತ್ತು 1444ರ ಮಧ್ಯೆ ಬಾರಕೂರಿನ ರಾಜ್ಯಪಾಲನಾಗಿದ್ದಾಗ ಚಾಂತಾರಿನಲ್ಲಿ ಈಶ್ವರ ಉಂಗುರ ವಳ್ಳಿಯ ಮನೆಯನ್ನು "ಸುಟ್ಟು ಹಾಳುಮಾಡಿ ಮರನೂ ಕಡಿದು ದಾರಿಮೇರೆಯನೂ ತಪ್ಪಿಸಿದ್ದರಿಂದ" ಉಂಗುರ ವಳ್ಳಿ ಪ್ರತಿಭಟಿಸಿ ಊರು ಬಿಟ್ಟುಹೋದ.

ಹಾರಾಡಿಯಲ್ಲಿ ವಾರಂಬಳ್ಳಿಯ ಮೇಲೂ ಇಂತ ಹದೇ ದಬ್ಬಾಳಿಕೆಯನ್ನು ತಿಮ್ಮಣ್ಣ ಒಡೆಯ ಮಾಡಿದ. ಅವನು ಬ್ರಹ್ಮಾವರ ಪಡುವ ಭಾಗದ ಗ್ರಾಮಿಣಿಯಾಗಿದ್ದ ಅಂಣವೋರಂಬಳ್ಳಿಯ ಮನೆಯನ್ನು ಸೂರೆಗೈದು ಸುಟ್ಟು ಹಾಕಿದ್ದರಿಂದಾಗಿ ಆ ವೋರಂಬಳ್ಳಿ ಮನೆಯವರು ಈ ಜಾಗ ಬಿಟ್ಟು ಹೋದರು. ಈ ಎರಡೂ ಮನೆತನಗಳವರು ಗ್ರಾಮಿಣಿಗಳಾಗಿದ್ದು ಈ ಪ್ರದೇಶದಲ್ಲಿ ಸಾಕಷ್ಟು ಪ್ರಭಾವಿ ಗಳಾಗಿದ್ದವರು. ಬಲಾತ್ಕಾರದ ತೆರಿಗೆ ಸಂಗ್ರಹಕ್ಕೆ ಸಂಬಂಧಿಸಿದಂತೆ ಈ ಘಟನೆ ನಡೆದಿರಲೂಬಹುದು. ನಂತರ ರಾಜ್ಯಪಾಲನಾಗಿ ಬಂದ ರೂಪಣ್ಣ ಒಡೆಯನು

---

3. S.I.I. Vol. VII No. 349; Ramesh K. V. A History of South Kanara (Dharwad, 1970) p. 162.
4. S.I.I. Vol VII No. 182.
5. Gururaja Bhat P, Studies in Tulava History and Culture (Kallianpur, 1975) pp. 194-95; Kamath S. U., 'Hanjamana', The Journal of the Institute of Iudian Studies, (Udupi 1978) vol I.
6. S.I.I. vol VII No. 296.

ಕ್ರಿ.ಶ. 1447ರಲ್ಲಿ ಈ ಊರುಗಳಿಗೆ ಬಂದು ಗ್ರಾಮಗಳನ್ನು ಸಂತೈಸಿ ನೊಂದವರಿಗೆ ಪರಿಹಾರ ನೀಡಿದ.[7]

ಕ್ರಿ.ಶ. 1451–52 ರಲ್ಲಿ ಬಾರಕೂರು ರಾಜ್ಯದ ರಾಜ್ಯಪಾಲನಾಗಿದ್ದ ಭಾನಪ್ಪ ಒಡೆಯ ಮಟಪಾಡಿಯಲ್ಲಿ ಉಂಗುರಪಳ್ಳಿಯ 'ಅನ್ಯಮಾನ್ಯ'ವನು ತಪ್ಪಿಸಿದರಿಂದ ಪ್ರತಿಭಟನಾರ್ಥ ಅವನು ಊರನ್ನೇ ತ್ಯಜಿಸಿದ. ನಂತರ ರಾಜ್ಯಪಾಲನಾಗಿ ಬಂದ ಪಂಡರಿದೇವ ಒಡೆಯ ಭಾನಪ್ಪ ಒಡೆಯನನ್ನೂ ಅಧಿಕಾರಿ ಹರಿಯಪ್ಪನನ್ನೂ ಕರೆದುಕೊಂಡು ಮಟಪಾಡಿಗೆ ಬಂದು ಉಂಗುರಪಳ್ಳಿಯನ್ನು ಊರಿಗೆ ವಾಪಸು ಕರೆಸಿ ಅವನಿಗೆ ಪರಿಹಾರ ನೀಡಿದ (ಕ್ರಿ.ಶ. 1415) "ಮಟಪಾಡಿ ಗ್ರಾಮ ಹದಿನೈದು" ಮನವಿ ಮಾಡಿಕೊಂಡ ಮೇರೆಗೆ ಉಂಗುರಪಳ್ಳಿ, ವಾಪಸು ಬಂದ, ಅವನಿಗೆ ಪರಿಹಾರ ದೊರೆಯಿತು. ಊರ ಹಾಲ ಹಬ್ಬವನ್ನು ನಡೆಸುವ ಅಧಿಕಾರವನ್ನೂ ಅವನಿಗೆ ನೀಡಲಾಯಿತು.[8]

ವಿಜಯನಗರದ ಬಾರಕೂರು ರಾಜ್ಯದಲ್ಲಿ ಸಾಮ್ರಾಜ್ಯದ ತೆರಿಗೆ ನೀತಿಗೆ ಕ್ರಿ.ಶ. 1536 ರಲ್ಲಿ ಪ್ರತಿಭಟನೆ ವ್ಯಕ್ತವಾದಂತೆ ಕಾಣುತ್ತದೆ. 'ರಾಜಕಾರ್ಯಕ್ಕಾಗಿ' ಉಪ್ಪೂರು ಗ್ರಾಮದ ಮೇಲೆ ರಾಜ್ಯಪಾಲ ಕೊಂಡಪ್ಪ ಒಡೆಯ ಸೈನ್ಯದೊಂದಿಗೆ ಧಾಳಿಮಾಡಿದ. ಊರಿನವರ ಪ್ರಬಲ ಪ್ರತಿಭಟನೆ ಹಿಂಸಾರೂಪ ತಳೆಯಿತು. ಹಲವು ಗಂಡಸರು ಪ್ರಾಣ ಕಳೆದುಕೊಂಡರು, ಹೆಂಗಸರ ಮೇಲೂ ರಾಜ್ಯಪಾಲನ ಕಡೆಯವರು ಕೈಮಾಡಿದರು. ಕೊನೆಗೂ ಕೊಂಡಪ್ಪ ಒಡೆಯ ಈ ಊರಿನ ಶಿವಕೇಕುಡಿಗೆ ಹೆಣ್ಣಿನ ನಿರಿಗೆಗೆ (ಪರಿಶುದ್ಧಿಗಿ) ಪರಿಹಾರ ನೀಡಬೇಕಾಯಿತು. ಕೋಟೇಶ್ವರನ ಶಾಸನ ಸೂಚಿಸುವಂತೆ ಪ್ರಾಯಶಃ ಕೊಂಡಪ್ಪ ಒಡೆಯ ತನ್ನ ಹುದ್ದೆಯನ್ನು ಕಳೆದುಕೊಳ್ಳಬೇಕಾಯಿತು.

ಕ್ರಿ.ಶ. 1544 ರಲ್ಲಿ ಆಚಪ್ಪ ಒಡೆಯ ಬಾರಕೂರು ರಾಜ್ಯವನ್ನು ಆಳುವಾಗ ಕೋಟಿಕೇರಿಯ ಸೆಟ್ಟಿಕಾರ ಬೆಮ್ಮಬಾಲೆಸೆಟ್ಟಿಯ ಮಗಳ ಮೇಲೆ ಅತ್ಯಾಚಾರವೆಸಗಿದ್ದರಿಂದ ("ನಿಮ್ಮ ಹೆಣ್ಣಿನ ಮೇಲೆ ತಪ್ಪಿಸಿದಕೆ....") ಬಾರಕೂರಿನ ಹತ್ತು ಕೇರಿಯುವರ ಪ್ರತಿಭಟನೆಯನ್ನು ಇದಿರಿಸಬೇಕಾಯಿತು. ಪುರಸಭೆಯವರ ಈ ಪ್ರತಿಭಟನೆಯಿಂದಾಗಿ ಆಚಪ್ಪ ಒಡೆಯ ತನ್ನ ತಪ್ಪಿಗಾಗಿ ಬೆಮ್ಮಬಾಲೆಸೆಟ್ಟಿ ವಂಶಪಾರಂಪರ್ಯವಾಗಿ ಉಪ್ಪಿಲಾಡಿಯಲ್ಲಿ (ಬನ್ನಾಡಿ) ಅರಮನೆಯ ಭೂಮಿಯಲ್ಲಿನ ಆದಾಯ ಅನುಭವಿಸಿ ಬರುವಂತೆ ಪರಿಹಾರವನ್ನು ನೀಡಿದ.

ಎಷ್ಟೇ ಜಾಗರೂಕವಾಗಿ ಕಾರ್ಯನಿರ್ವಹಿಸಬೇಕಾದ ಪರಿಸ್ಥಿತಿಯಿದ್ದರೂ ಕೆಲವು ರಾಜ್ಯಪಾಲರು ವಿವಿಧ ಸಂದರ್ಭಗಳಲ್ಲಿ ತಮ್ಮ ಅಧಿಕಾರ ಮೀರಿ ದಬ್ಬಾಳಿಕೆಯಿಂದ ವರ್ತಿಸಿದರು. ಕೆಲವು ಸಂದರ್ಭಗಳಲ್ಲಿ ಹೆಚ್ಚಿನ ತೆರಿಗೆ ಇಂತಹ ಪರಿಸ್ಥಿತಿಗೆ ಎಡೆಮಾಡಿಕೊಟ್ಟಿರಬಹುದು. ಇದಕ್ಕಿಂತ ಹೆಚ್ಚಾಗಿ ತೆರಿಗೆ ಸಂಗ್ರಹಿಸುವ ರೀತಿ, ಬಲಾತ್ಕಾರ ಇತ್ಯಾದಿ ಜನರ ಪ್ರತಿಭಟನೆಗೆ ಕಾರಣವಾಗಿರಬಹುದು. ಶಕ್ತಿಪ್ರಯೋಗದ ಪ್ರತಿಭಟನೆ ಸಾಧ್ಯವಾಗದಿದ್ದಾಗ ಜನ ಊರು ಬಿಟ್ಟು ಹೋದ ಉದಾಹರಣೆಗಳು ನಮಗೆ ದೊರೆಯುತ್ತವೆ. ಹೀಗೆ ಜನ ಊರು ತ್ಯಜಿಸಿ ಹೋಗುವುದು ರಾಜ್ಯದ ಆಡಳಿತಕ್ಕೆ ಕೆಟ್ಟ ಹೆಸರನ್ನು ತರುತ್ತಿದ್ದರಿಂದ ಸರಕಾರ ಕೂಡಲೇ ಕ್ರಮ ಕೈಗೊಳ್ಳುತ್ತಿತ್ತು.[10] ಮಂಗಳೂರು ಮತ್ತು ಬಾರಕೂರು ರಾಜ್ಯಗಳಲ್ಲಿ ಈ ರೀತಿಯ ಪ್ರತಿಭಟನೆಯನ್ನು ಸಲ್ಲಿಸಿ ಜನ ನ್ಯಾಯ ದೊರಕಿಸಿಕೊಂಡಿದ್ದರು. ಕೆಲವು ಬಾರಿ ಒಗ್ಗಟ್ಟಾಗಿ ಶಕ್ತಿಪ್ರಯೋಗದ ಪ್ರತಿಭಟನೆಯನ್ನೂ ಸಲ್ಲಿಸಿದ್ದರು.

ಮೇಲಿನ ಎಲ್ಲಾ ಉದಾಹರಣೆಗಳಿಂದ ದಬ್ಬಾಳಿಕೆ

7. ವಸಂತಶೆಟ್ಟಿ. ಬಿ; ಬ್ರಹ್ಮಾವರದ ಇತಿಹಾಸ, (ಬ್ರಹ್ಮಾವರ, ೧೯೮೮) ಪು. ೨೩–೨೪ ಮತ್ತು ೪೭–೪೯.

8. ಅದೇ, ಪು. ೨೪–೨೫. ಹೊಸತಾಗಿ ದೊರೆತ ಈ ಶಾಸನದ ಪೂರ್ಣ ಪಾಠ ಪು. ೪೯–೫೦ ರಲ್ಲಿದೆ.

9: ARSIE 1928-29 No. 487 & Ramesh K. V. Opcit p. 225. S.I.I. vol IX pt No. 578.

10. cf :-Mahalingam T.V; opcit, pp. 93–94. "The King is never prosperous even though he conquers the seven dvipas who has an officer who does not call back the subjects when they leave the state on account of suffering".... says Amuktamalyada.

ಯನ್ನು ಜನ ಸಹಿಸಿ ಸುಮ್ಮನಿರುತ್ತಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ತೊಂದರೆಗೊಳಗಾದವರ ಸಹಾಯಕ್ಕಾಗಿ ಪುರಸಭೆಗಳು, ಗ್ರಾಮಸಭೆಗಳು ಮುಂದೆ ಬರುತ್ತಿದ್ದವು. ಜನರ, ವ್ಯಾಪಾರಿ ಸಂಘಗಳ ಅಥವಾ ಜನರ ಪ್ರತಿನಿಧಿಗಳ ಕೆಲವು ವಿಶೇಷ ಅಧಿಕಾರಗಳನ್ನು ಕೇಂದ್ರ ಅಥವಾ ಪ್ರಾಂತೀಯ ಸರಕಾರ ಕಸಿದುಕೊಳ್ಳುವಂತಿರಲಿಲ್ಲ. ರಾಜ್ಯಪಾಲನ ವಿರುದ್ಧ ದೂರು ಬಂದಲ್ಲಿ ತನಿಖೆ ನಡೆಸಿ ಸಾಮ್ರಾಟ ಕ್ರಮ ತೆಗೆದುಕೊಳ್ಳುತ್ತಿದ್ದ, ಪ್ರಜೆಗಳಿಗೆ ಸಾಮ್ರಾಟನಿಂದ ನ್ಯಾಯ ದೊರೆಯುತ್ತಿತ್ತು, ಅನ್ಯಾಯವಾದಾಗ ಜನ ಕ್ಷಿಪ್ರವಾಗಿ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಿದ್ದರು. ನ್ಯಾಯ ದೊರಕಿಸಿಕೊಳ್ಳಲು ವಿವಿಧ ರೀತಿಯಲ್ಲಿ ಪ್ರಯತ್ನಿಸಿ ಸಫಲರಾಗುತ್ತಿದ್ದರು. ಇಂತಹ ಪ್ರತಿಕ್ರಿಯೆ ಆಡಳಿತ ವ್ಯವಸ್ಥೆಯ ಮೇಲೆ ತನ್ನದೇ ಆದ ಪರಿಣಾಮವನ್ನು ಬೀರಿತು. ೦